

# ಕರ್ನಾಟಕ ವಿಧಾನ ಪರಿಷತ್ತು

**ಸದಸ್ಯರ ಹೆಸರು** : ಶ್ರೀ ಕೆ. ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)

**ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ** : **1990**

**ಉತ್ತರಿಸಬೇಕಾದ ದಿನಾಂಕ** : **16.03.2022**

**ಉತ್ತರಿಸಬೇಕಾದ ಸಚಿವರು** : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮಂಡ್ಯ ಜಿಲ್ಲೆಯ ಸಂಕೇಬಾಚಹಳ್ಳಿಯ ಗವಿ ರಂಗನಾಥಸ್ವಾಮಿ ದೇವಾಲಯದ ಬಳಿ ಗಂಡು ಕರುಗಳು ಮೇವು ನೀರಿಲ್ಲದೆ ಸಾಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ರಾಜ್ಯದಲ್ಲಿ ಜಾನುವಾರು ಹತ್ಯೆ ಪ್ರತಿಬಂಧಕ ಮತ್ತು ಸಂರಕ್ಷಣಾ ಕಾಯ್ದೆ ಜಾರಿಗೆ ಬಂದ ನಂತರ ಈ ರೀತಿ ಪ್ರಕರಣಗಳು ಹೆಚ್ಚಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಈ ರೀತಿಯಾದ ಯಾವುದೇ ಪ್ರಕರಣಗಳು ರಾಜ್ಯದ ಇತರೆ ಭಾಗಗಳಲ್ಲಿ ವರದಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಇ | ಹಾಗಿದ್ದಲ್ಲಿ, ಗೋ ಶಾಲೆ ಪ್ರಾರಂಭಿಸಿ ಈ ಕರುಗಳ ರಕ್ಷಣೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಮಂಡ್ಯ ಜಿಲ್ಲೆಯಲ್ಲಿ ಒಟ್ಟು 5 ಖಾಸಗಿ ಗೋ ಶಾಲೆಗಳಿವೆ. ಈ ಗೋ ಶಾಲೆಗಳಲ್ಲಿ, ಗಂಡು ಕರುಗಳು, ವಯಸ್ಸಾದ, ಅನಾರೋಗ್ಯ ಪೀಡಿತ, ರೈತರು ಬಿಡುವ, ಮಾನ್ಯ ನ್ಯಾಯಾಲಯದ ಆದೇಶದ ಮೇರೆಗೆ ಕಳುಹಿಸುವ ಜಾನುವಾರುಗಳನ್ನು ನಿರ್ವಹಣೆ ಮಾಡಲಾಗುತ್ತಿದೆ.<br><br>2021-22ನೇ ಸಾಲಿನಲ್ಲಿ ವಂಟನದ ಲಭ್ಯತೆ ಅನುಗುಣವಾಗಿ ಈ ಎಲ್ಲಾ ಗೋಶಾಲೆಗಳಿಗೆ ಒಟ್ಟು ₹22.61 ಲಕ್ಷ ಅನುದಾನವನ್ನು ನೀಡಲಾಗಿದೆ.<br><br>ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಚಿಕ್ಕ ಅಂಕನ ಹಳ್ಳಿ ಗ್ರಾಮದ ಸ.ನ.804/6ರ 10.00 ಎಕರೆ ಪ್ರದೇಶದಲ್ಲಿ ಸರ್ಕಾರಿ ಗೋಶಾಲೆಯನ್ನು ಪ್ರಾರಂಭಿಸಲಾಗುತ್ತಿದೆ. ಇದಕ್ಕಾಗಿ ₹36.00 ಲಕ್ಷಗಳ ಅನುದಾನವನ್ನು ಜಿಲ್ಲಾ ಪ್ರಾಣಿ ದಯಾ ಸಂಘ ಮಂಡ್ಯಕ್ಕೆ ಬಿಡುಗಡೆ ಮಾಡಲಾಗಿದೆ. |

**ಇ-ಪಸಂಮೀ 90 ಸಲೆವಿ 2022**

(ಪ್ರಭು ಬಿ. ಚವ್ಹಾಣ್)
**ಪಶುಸಂಗೋಪನೆ ಸಚಿವರು**